# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 460 |
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಸಯದ್ ಮುಧೀರ್ ಆಗಾ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 19.02.2018. |
| ಉತ್ತರಿಸುವ ಸಚಿವರು | : | ಮಾನ್ಯ ಆಹಾರ ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಮತ್ತು ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಮನಗರ ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ವಿವಿಧ ಪ್ರಕರಣಗಳಡಿ ಅಮಾನತ್ತಾದ ಪಡಿತರ ನ್ಯಾಯಬೆಲೆ ಅಂಗಡಿಗಳೆಷ್ಟು; ಈ ರೀತಿ ಅಮಾನತ್ತಾದ ನ್ಯಾಯಬೆಲೆ ಅಂಗಡಿಗಳನ್ನು ಮುಂದುವರೆಸಲು ಪರ್ಯಾಯ ಕ್ರಮಗಳನ್ನು ಕೈಗೊಳ್ಳಲಾಗಿದೆಯೇ; (ವಿಧಾನಸಭಾ ಕ್ಷೇತ್ರವಾರು ವಿವರಗಳನ್ನು ನೀಡುವುದು) | ರಾಮನಗರ ಜಿಲ್ಲೆಯಲ್ಲಿ ವಿಧಾನಸಭಾ ಕ್ಷೇತ್ರವಾರು ಅಮಾನತ್ತಾದ ನ್ಯಾಯಬೆಲೆ ಅಂಗಡಿಗಳ ವಿವರ ಈ ಕೆಳಕಂಡಂತಿದೆ: (table below) |

| ಕ್ರ.ಸಂ | ವಿಧಾನಸಭಾ ಕ್ಷೇತ್ರ | ಅಮಾನತ್ತಾದ ನ್ಯಾಯಬೆಲೆ ಅಂಗಡಿ ಸಂಖ್ಯೆ |
|---|---|---|
| 1 | ರಾಮನಗರ | 2 |
| 2 | ಕನಕಪುರ | – |
| 3 | ಮಾಗಡಿ | – |
| 4 | ಚನ್ನಪಟ್ಟಣ | – |
| 5 | ನೆಲಮಂಗಲ | – |
| | ಒಟ್ಟು | 2 |

ಚಾಮರಾಜನಗರ ಜಿಲ್ಲೆಯಲ್ಲಿ ವಿಧಾನಸಭಾ ಕ್ಷೇತ್ರವಾರು ಅಮಾನತ್ತಾದ ನ್ಯಾಯಬೆಲೆ ಅಂಗಡಿಗಳ ವಿವರ ಈ ಕೆಳಕಂಡಂತಿದೆ:

| ಕ್ರ.ಸಂ | ವಿಧಾನಸಭಾ ಕ್ಷೇತ್ರ | ಅಮಾನತ್ತಾದ ನ್ಯಾಯಬೆಲೆ ಅಂಗಡಿ ಸಂಖ್ಯೆ |
|---|---|---|
| 1 | ಚಾಮರಾಜನಗರ | 07 |
| 2 | ಕೊಳ್ಳೇಗಾಲ | 04 |
| 3 | ಹನೂರು | 10 |
| 4 | ಗುಂಡ್ಲುಪೇಟೆ | 17 |
| | ಒಟ್ಟು | 38 |

| | | |
|---|---|---|
| | | ಈ ನ್ಯಾಯಬೆಲೆ ಅಂಗಡಿಗಳ ಪಡಿತರ ಚೀಟಿಗಳನ್ನು ಸಮೀಪದ ನ್ಯಾಯಬೆಲೆ ಅಂಗಡಿಗೆ ನಿಯೋಜಿಸಿ ಪಡಿತರ ವಿತರಣೆ ಮಾಡಿಸಲಾಗುತ್ತಿದ್ದು, ಪ್ರಕರಣಗಳು ವಿಚಾರಣಾ ಹಂತದಲ್ಲಿರುತ್ತವೆ. |
| ಆ) | ಇಂತಹ ಪ್ರಕರಣಗಳನ್ನು ಇತ್ಯರ್ಥಪಡಿಸಲು ಯಾವ ಹಂತದ ಅಧಿಕಾರಿಯನ್ನು ನೇಮಿಸಲಾಗಿದೆ: (ಸಂಪೂರ್ಣ ಮಾಹಿತಿ ನೀಡುವುದು) | ಜಿಲ್ಲಾ ಮಟ್ಟದಲ್ಲಿ ಪ್ರಕರಣ ಇತ್ಯರ್ಥಪಡಿಸಲು ಉಪನಿರ್ದೇಶಕರಿಗೆ ಅಧಿಕಾರ ನೀಡಲಾಗಿರುತ್ತದೆ. |
| ಇ) | ಕಳೆದ ಮೂರು ವರ್ಷಗಳಲ್ಲಿ ರಾಮನಗರ ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಹೊಸದಾಗಿ ಎಷ್ಟು ಪಡಿತರ ನ್ಯಾಯಬೆಲೆ ಅಂಗಡಿಗಳನ್ನು ಮಂಜೂರು ಮಾಡಲಾಗಿದೆ: | ರಾಮನಗರ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಿಂದ ಹೊಸದಾಗಿ ಮಂಜೂರು ಮಾಡಲಾಗಿರುವ ನ್ಯಾಯಬೆಲೆ ಅಂಗಡಿಗಳ ವಿವರ ಈ ಕೆಳಕಂಡಂತಿವೆ: (see table below) |

| ಕ್ರಸಂ | ತಾಲ್ಲೂಕು | ಮೂರು ವರ್ಷಗಳಲ್ಲಿನ ಮಂಜೂರಾದ ನ್ಯಾಯಬೆಲೆ ಅಂಗಡಿಗಳ ಸಂಖ್ಯೆ |
|---|---|---|
| 1 | ಚನ್ನಪಟ್ಟಣ | 01 |
| 2 | ಕನಕಪುರ | 02 |
| 3 | ಮಾಗಡಿ | 05 |
| 4 | ರಾಮನಗರ | 01 |
| | ಒಟ್ಟು | 09 |

ಚಾಮರಾಜನಗರ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಿಂದ ಹೊಸದಾಗಿ ಮಂಜೂರು ಮಾಡಲಾಗಿರುವ ನ್ಯಾಯಬೆಲೆ ಅಂಗಡಿಗಳ ವಿವರ ಈ ಕೆಳಕಂಡಂತಿವೆ:

| ಕ್ರಸಂ | ತಾಲ್ಲೂಕು | ಮೂರು ವರ್ಷಗಳಲ್ಲಿನ ಮಂಜೂರಾದ ನ್ಯಾಯಬೆಲೆ ಅಂಗಡಿಗಳ ಸಂಖ್ಯೆ |
|---|---|---|
| 1 | ಚಾಮರಾಜನಗರ | 05 |
| 2 | ಗುಂಡ್ಲುಪೇಟೆ | 08 |
| 3 | ಕೊಳ್ಳೇಗಾಲ | – |
| 4 | ಯಳಂದೂರು | 01 |
| | ಒಟ್ಟು | 14 |

| | | |
|---|---|---|
| ಈ) | ಹಾಗಿದ್ದಲ್ಲಿ, ಹೊಸದಾಗಿ ಪಡಿತರ ನ್ಯಾಯಬೆಲೆ ಅಂಗಡಿಗಳನ್ನು ಮಂಜೂರು ಮಾಡಲು ಇರುವ ಮಾನದಂಡಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ಅಗತ್ಯ ವಸ್ತುಗಳ ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ 2016 ರಲ್ಲಿ ಕಲ್ಪಿಸಿರುವ ಅವಕಾಶಗಳಂತೆ, ಈ ಕೆಳಕಂಡಂತೆ ಅವಶ್ಯತೆಯನುಸಾರ ಹೊಸ ನ್ಯಾಯಬೆಲೆ ಅಂಗಡಿಗಳನ್ನು ಮಂಜೂರು ಮಾಡಲು ಇರುವ ಮಾನದಂಡಗಳು ಈ ಕೆಳಕಂಡಂತಿವೆ:<br>1. ರಾಜ್ಯ ಸರ್ಕಾರಿ ಸ್ವಾಮ್ಯದ ನಿಗಮ/ಸಂಸ್ಥೆ ಅಥವಾ ಕಂಪನಿಗಳು ಅಥವಾ ಗ್ರಾಮ ಪಂಚಾಯ್ತಿ / ನಗರ ಸ್ಥಳೀಯ ಸಂಸ್ಥೆಗಳು.<br>2. ಪ್ರಾಥಮಿಕ ಕೃಷಿ ಸಹಕಾರ ಸಂಘಗಳು<br>3. ತೋಟಗಾರಿಕಾ ಉತ್ಪನ್ನಗಳ ಮಾರುಕಟ್ಟೆ ಮತ್ತು ಸಂಸ್ಕರಣಾ ಸಹಕಾರ ಸಂಘಗಳು.<br>4. ಕೆ.ಎಂ.ಎಫ್ ಪ್ರಾಯೋಜಕತ್ವದ ಹಾಲು ಉತ್ಪಾದಕರ ಸಹಕಾರ ಸಂಘಗಳು<br>5. ತಾಲ್ಲೂಕು ವ್ಯವಸಾಯೋತ್ಪನ್ನ ಸಹಕಾರ ಮತ್ತು ಮಾರುಕಟ್ಟೆ ಸಂಘಗಳು ಅಥವಾ ವ್ಯವಸಾಯೋತ್ಪನ್ನ ಸಹಕಾರ ಸಂಘ ನಿಯಮಿತ<br>6. ಸ್ತ್ರೀ ಶಕ್ತಿ ಗುಂಪುಗಳು ಮತ್ತು ಸ್ವ ಸಹಾಯ ಸಂಘಗಳು<br>ಸದರಿ ಸಹಕಾರ ಸಂಘಗಳು ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದು ಸುಸಜ್ಜಿತ ಮಳಿಗೆ ಹೊಂದಿರಬೇಕು ಹಾಗೂ 01 ವರ್ಷದ ಆಡಿಟ್ ವರದಿಯನ್ನು ಸಲ್ಲಿಸಬೇಕಾಗಿರುತ್ತದೆ. |

ದಿನಾಂಕ 25 [illegible] 2018

(ಯು.ಟಿ. ಖಾದರ್)
ಆಹಾರ ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.